# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 257 |
| ಸದಸ್ಯರ ಹೆಸರು | ಶ್ರೀ ಎನ್.ರವಿಕುಮಾರ್ |
| ಉತ್ತರಿಸುವ ದಿನಾಂಕ: | 04.03.2020 |
| ಉತ್ತರಿಸುವವರು | ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರಿಗೆ ಮತ್ತು ಇತರ ಸಹಾಯಕರಿಗೆ ಪ್ರಸ್ತುತ ನೀಡುತ್ತಿರುವ ವೇತನ ವೆಷ್ಟು; ದೇಶದ ಕನಿಷ್ಠ ವೇತನದ ನಿಯಮದನ್ವಯ ನೀಡಬೇಕಾದ ಕನಿಷ್ಠ ವೇತನ ಎಷ್ಟು; | ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಾವಳಿಗಳು 2002ರ ನಿಯಮ 8ಕ್ಕೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 54 ಮುಸೇವಿ 2017 ದಿನಾಂಕ:17.07.2019ರಲ್ಲಿ ತಿದ್ದುಪಡಿತರಲಾಗಿದೆ. ಈ ತಿದ್ದುಪಡಿ ನಿಯಮಾವಳಿಯಲ್ಲಿ ಉಪಲಬ್ಧಗಳನ್ನು ಅಧಿಸೂಚಿತ ಸಂಸ್ಥೆ/ಘೋಷಿತ ಸಂಸ್ಥೆಗಳ ವ್ಯವಸ್ಥಾಪನ ಸಮಿತಿಯು ನಿಯಮಿಸಲಾದ ಪ್ರಾಧಿಕಾರದ ಅನುಮೋದನೆಗೆ ಒಳಪಟ್ಟು ಅರ್ಚಕರು ಸ್ವೀಕರಿಸುವ ತಟ್ಟೆ ಕಾಸು ಮತ್ತು ಸೇವಾ ರುಸುಂನ್ನು ಗಮನದಲ್ಲಿರಿಸಿಕೊಂಡು ನಿರ್ಧರಿಸತಕ್ಕದ್ದು ಎಂದಿರುತ್ತದೆ. ಅದರನ್ವಯ ಆಯಾಯ ದೇವಾಲಯದ ಒಟ್ಟು ಆದಾಯದ ಶೇ.35 ಮೀರದಂತೆ ಅರ್ಚಕರು ಮತ್ತು ಇತರೆ ಸಹಾಯಕರುಗಳಿಗೆ ವೇತನ ಸವಲತ್ತುಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿದೆ. |
| ಆ | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರಿಗೆ ಮತ್ತು ಇತರೆ ಸಹಾಯಕರಿಗೆ ನೀಡುವ ವೇತನವನ್ನು ದುಪ್ಪಟ್ಟು ಮಾಡಲು ಸರ್ಕಾರ ಯಾವ ಕ್ರಮಕೈಗೊಂಡಿದೆ; | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರಿಗೆ ಮತ್ತು ಇತರೆ ಸಹಾಯಕರಿಗೆ ನೀಡುವ ವೇತನವನ್ನು ಪರಿಷ್ಕರಿಸುವ ಬಗ್ಗೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು 2002ರ ನಿಯಮ 8ಕ್ಕೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 54 ಮುಸೇವಿ 2017 ದಿನಾಂಕ:17.07.2019ರಲ್ಲಿ ತಿದ್ದುಪಡಿತರಲಾಗಿದೆ. ಅದರನ್ವಯ ಸವಲತ್ತುಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿದೆ. |
| ಇ | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರ ಮತ್ತು ಇತರ ಸಹಾಯಕರ ಮಕ್ಕಳು ಹಾಗೂ ಕುಟುಂಬದವರಿಗೆ ಸರ್ಕಾರ ಯಾವ ಯಾವ ಸೌಲಭ್ಯಗಳನ್ನು ನೀಡುತ್ತಿದೆ; | ಸರ್ಕಾರದ ಆದೇಶ ಸಂಖ್ಯೆ:ಕಂಇ 50 ಮುಸೇವಿ 2015 ದಿನಾಂಕ:07.05.2015ರಂತೆ ದೇವಾಲಯಗಳಲ್ಲಿ ಪ್ರತಿ ವರ್ಷ ಜರುಗುವ ಜಾತ್ರಾ ಮಹೋತ್ಸವ, ರಥೋತ್ಸವ ಮುಂತಾದ ವಿಶೇಷ ಧಾರ್ಮಿಕ ಸಂದರ್ಭಗಳಲ್ಲಿ ಕಾರ್ಯನಿರ್ವಹಿಸುವ ದೇವಾಲಯದ ನೌಕರರುಗಳಿಗೆ/ ಅರ್ಚಕರುಗಳಿಗೆ ಒಂದು ತಿಂಗಳ ವೇತನವನ್ನು ಜಾತ್ರಾ ಬೋನಸ್ ಆಗಿ ನೀಡಲಾಗುತ್ತಿದೆ ಹಾಗೂ ಇ.ಪಿ.ಎಫ್., ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ಅಲ್ಲದೇ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಾವಳಿಗಳು 2002ರ ನಿಯಮ (16)ರಂತೆ ಅರ್ಚಕರು/ ನೌಕರರಿಗೆ ನಿವೃತ್ತಿ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಅಲ್ಲದೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 54 ಮುಸೇವಿ 2017 ದಿನಾಂಕ:17.07.2019 ರ ತಿದ್ದುಪಡಿ ನಿಯಮಗಳನ್ವಯ ಸವಲತ್ತುಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿದೆ. |

| | | |
|---|---|---|
| ಈ | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರ ಮತ್ತು ಇತರ ಸಹಾಯಕರ ಮಕ್ಕಳಿಗೆ ಸ್ಕಾಲರ್‌ಶಿಫ್ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು? ಉನ್ನತ ಶಿಕ್ಷಣ ಪಡೆಯುತ್ತಿರುವ ಮಕ್ಕಳಿಗೆ ಎಷ್ಟು ಮೊತ್ತದ ಸ್ಕಾಲರ್‌ಶಿಫ್ ನೀಡಲಾಗುವುದು: | ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಮತ್ತು ನಿಯಮಾವಳಿಗಳು 2002ರನ್ವಯ ಅರ್ಚಕರು ಮತ್ತು ಇತರ ಸಹಾಯಕರ ಮಕ್ಕಳಿಗೆ ಸ್ಕಾಲರ್‌ಶಿಫ್ ನೀಡಲು ಅವಕಾಶವಿರುವುದಿಲ್ಲ. |
| ಉ | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರು ಮತ್ತು ಇತರ ಸಹಾಯಕರು ಸೇರಿದಂತೆ ಅವರ ಕುಟುಂಬ ವರ್ಗದವರಿಗೆ ಆಸ್ಪತ್ರೆಗಳಲ್ಲಿ ಚಿಕಿತ್ಸೆ ನೀಡಲು ಸರ್ಕಾರ ಜಾರಿಗೊಳಿಸಿರುವ ಯೋಜನೆ ಯಾವುದು? | ಮುಜರಾಯಿ ಇಲಾಖೆಗೆ ಒಳಪಡುವ ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಚಕರು ಮತ್ತು ಇತರ ಸಹಾಯಕರು ಸೇರಿದಂತೆ ಅವರ ಕುಟುಂಬ ವರ್ಗದವರಿಗೆ ಆಸ್ಪತ್ರೆಗಳಲ್ಲಿ ಚಿಕಿತ್ಸೆ ನೀಡುವ ಕುರಿತು ಸರ್ಕಾರದಿಂದ ಯಾವುದೇ ಯೋಜನೆ ರೂಪಿಸಿರುವುದಿಲ್ಲ. |

(ಸಂಖ್ಯೆ:ಕಂಇ 11 ಮುಸಪ್ರ 2020)

(ಕೋಟಾ ಶ್ರೀನಿವಾಸ ಪೂಜಾರಿ)
ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು